## ಕರ್ನಾಟಕ ವಿಧಾನ ಪರಿಷತ್

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 83 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಅರವಿಂದ ಕುಮಾರ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು) |
| 3) | ಉತ್ತರಿಸಬೇಕಾದ ದಿನಾಂಕ | 07/12/2020 |
| 4) | ಉತ್ತರಿಸುವವರು | ಉಪ ಮುಖ್ಯಮಂತ್ರಿಗಳು ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಸಚಿವರು |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿರುವ ಐಟಿಐ ಕಾಲೇಜುಗಳಿಗೆ ಉಪ ಪ್ರಾಚಾರ್ಯರನ್ನು ಜೂನ್ ತಿಂಗಳ 2020 ಒಳಗಾಗಿ ನೇಮಕಾತಿ ಮಾಡಲಾಗುವುದೆಂದು ಹಿಂದಿನ ಅಧಿವೇಶನದಲ್ಲಿ ಆಶ್ವಾಸನೆಯನ್ನು ನೀಡಲಾಗಿದ್ದು, ಈ ಪ್ರಕ್ರಿಯೆ ಯಾವ ಹಂತದಲ್ಲಿದೆ; ಅಥವಾ ಇದನ್ನು ಸಾಕಾರಗೊಳಿಸಲಾಗಿದೆಯೇ; | ಬೀದರ್ ಜಿಲ್ಲೆಯಲ್ಲಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಉಪ ಪ್ರಾಚಾರ್ಯರ ಹುದ್ದೆ ಮಂಜೂರಾಗಿರುವುದಿಲ್ಲ. |
| ಆ) | ಜಿಲ್ಲೆಯಲ್ಲಿ ಎಷ್ಟು ಐಟಿಐ ಕಾಲೇಜುಗಳಿವೆ; ಅವುಗಳಲ್ಲಿ ಎಷ್ಟು ಕಾಲೇಜುಗಳಲ್ಲಿ ಪ್ರಾಚಾರ್ಯರು ಮತ್ತು ಉಪ ಪ್ರಾಚಾರ್ಯರು ಕಾರ್ಯನಿರ್ವಹಿಸುತ್ತಿದ್ದಾರೆ? (ಸಂಪೂರ್ಣ ಮಾಹಿತಿ ನೀಡುವುದು) | ಬೀದರ್ ಜಿಲ್ಲೆಯಲ್ಲಿ ಒಟ್ಟು 6 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿವೆ. ಬೀದರ್ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಪ್ರಾಚಾರ್ಯರ ಹುದ್ದೆಗಳ ವಿವರ ಈ ಕೆಳಗಿನಂತಿದೆ. |

| ಕ್ರ ಸಂ | ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯ ಹೆಸರು | ಮಂಜೂರಾದ ಹುದ್ದೆ | ಭರ್ತಿಯಾದ ಹುದ್ದೆ | ಖಾಲಿ ಹುದ್ದೆ |
|---|---|---|---|---|
| 1 | ಬೀದರ್ | ಪ್ರಾಚಾರ್ಯ ದರ್ಜೆ-1 – 01 | 0 | 1 |
| 2 | ಹುಮ್ನಾಬಾದ್ | 0 | 0 | 0 |
| 3 | ಬಸವಕಲ್ಯಾಣ | ಪ್ರಾಚಾರ್ಯ ದರ್ಜೆ-2 – 01 | 0 | 1 |
| 4 | ಔರಾದ್ | ಪ್ರಾಚಾರ್ಯ ದರ್ಜೆ-2 – 01 | 0 | 1 |
| 5 | ಭಾಲ್ಕಿ | ಪ್ರಾಚಾರ್ಯ ದರ್ಜೆ-2 – 01 | 1 | 0 |
| 6 | ಕಮಲಾನಗರ | ಪ್ರಾಚಾರ್ಯ ದರ್ಜೆ-2 – 01 | 0 | 1 |

ಖಾಲಿ ಇರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಪ್ರಾಚಾರ್ಯರ ಹುದ್ದೆಗಳನ್ನು ಹತ್ತಿರದ ಸಂಸ್ಥೆಯ ಪ್ರಾಚಾರ್ಯರುಗಳ ಹೆಚ್ಚುವರಿ ಪ್ರಭಾರೆ ವ್ಯವಸ್ಥೆಯಿಂದ ಭರ್ತಿ ಮಾಡಿ ತರಬೇತಿ ಕಾರ್ಯವನ್ನು ನಿರ್ವಹಿಸಲಾಗುತ್ತಿದೆ. ಪ್ರಸ್ತುತ ತರಬೇತಿ ಅಧಿಕಾರಿ ವೃಂದದಿಂದ ಪ್ರಾಚಾರ್ಯರು ದರ್ಜೆ-2 ಹುದ್ದೆಗೆ ಮುಂಬಡ್ತಿ ನೀಡುವ ಪ್ರಕ್ರಿಯೆ ಚಾಲ್ತಿಯಲ್ಲಿದ್ದು, ಖಾಲಿ ಇರುವ ಪ್ರಾಚಾರ್ಯರು ದರ್ಜೆ-2 ಹುದ್ದೆಗಳನ್ನು ಮುಂಬಡ್ತಿಯಿಂದ ಭರ್ತಿ ಮಾಡಲು ಕ್ರಮವಹಿಸಲಾಗುತ್ತಿದೆ.

**ಸಂಖ್ಯೆ: ಕೌಉಜೀಇ 64 ಕೈತಪ್ರ 2020**

(ಡಾ.ಸಿ.ಎನ್.ಅಶ್ವಥ ನಾರಾಯಣ)
ಉಪ ಮುಖ್ಯಮಂತ್ರಿಗಳು ಹಾಗೂ
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು